# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಬಿ.ಜಿ. ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 1095

ಉತ್ತರ ದಿನಾಂಕ : 12.03.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಯನ್ನು ಜಲಧಾರೆ ಯೋಜನೆಗೆ ಆಯ್ಕೆ ಮಾಡಲಾಗಿದೆಯೇ; | ಯಾದಗಿರಿ ಜಿಲ್ಲೆಯು Aspirational Districts ಅಡಿಯಲ್ಲಿ ಬರುವುದರಿಂದ ಜಲಧಾರೆ ಯೋಜನೆಯಡಿ ಸದರಿ ಜಿಲ್ಲೆಯ ಎಲ್ಲಾ ಜನವಸತಿಗಳಿಗೆ ಕುಡಿಯುವ ನೀರನ್ನು ಒದಗಿಸಲು ಯೋಜಿಸಿದ್ದು, ಪಿ.ಎಸ್.ಆರ್. ತಯಾರಿಕಾ ಹಂತದಲ್ಲಿರುತ್ತದೆ. ಜಲಮೂಲದ ಸುಸ್ಥಿರತೆ ಹಾಗೂ ಅನುದಾನದ ಲಭ್ಯತೆಯನ್ನು ಆಧರಿಸಿ ಪಿ.ಎಸ್.ಆರ್.ಗೆ ಆಡಳಿತಾತ್ಮಕ ಅನುಮೋದನೆ ದೊರೆತ ಕೂಡಲೇ ಕೆ.ಟಿ.ಪಿ.ಪಿ ನಿಯಮಾನುಸಾರ ಟೆಂಡರ್ ಕರೆದು ಕಾಮಗಾರಿಯನ್ನು ಕೈಗೊಂಡು ಜಿಲ್ಲೆಯ ಎಲ್ಲಾ ಗ್ರಾಮೀಣ ಪ್ರದೇಶಗಳಿಗೆ ಶುದ್ಧ ಕುಡಿಯುವ ನೀರನ್ನು ಒದಗಿಸಲು ಕ್ರಮವಹಿಸಲಾಗುವುದು. |
| ಆ) | ಜಲಧಾರೆ ಯೋಜನೆಯ ವ್ಯಾಪ್ತಿಗೊಳಪಡಿಸಲು ಇರುವ ಮಾನದಂಡಗಳೇನು; ಈ ಯೋಜನೆಯ ಅನುಷ್ಠಾನಕ್ಕೆ ಸರ್ಕಾರ ನಿಗಧಿಪಡಿಸಿದ ಅನುದಾನ ಎಷ್ಟು; ಇದರಲ್ಲಿ ಯಾವ ಯಾವ ಕಾಮಗಾರಿಗಳನ್ನು ಕೈಗೊಳ್ಳಬಹುದಾಗಿದೆ? (ವಿವರ ನೀಡುವುದು) | • ಎಲ್ಲಾ ಗ್ರಾಮೀಣ ಜನವಸತಿಗಳಿಗೆ ಸುಸ್ಥಿರ ಮೇಲ್ಮೈ ಜಲಸಂಪನ್ಮೂಲಗಳಾದ ನದಿ ಹಾಗೂ ಜಲಾಶಯಗಳಿಂದ ನೀರನ್ನು ಪಡೆದು ಶುದ್ಧೀಕರಿಸಿ ತಲಾ 55 ಲೀಟರ್‌ನಂತೆ ಶುದ್ಧ ಕುಡಿಯುವ ನೀರನ್ನು ಒದಗಿಸುವುದು ಜಲಧಾರೆ ಯೋಜನೆಯ ರೂಪ-ರೇಷೆಯಾಗಿರುತ್ತದೆ.<br>• ಜಲಧಾರೆ ಯೋಜನೆಯನ್ನು 2013-14ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಲಾಗಿದೆ ಹಾಗೂ ಇದಕ್ಕೆ ಸಂಪುಟ ಮತ್ತು ಹಣಕಾಸು ಇಲಾಖೆಯಿಂದ ಒಪ್ಪಿಗೆ ನೀಡಲಾಗಿದ್ದು, ಯೋಜನೆಯ ಅನುಷ್ಠಾನಕ್ಕೆ ಸರ್ಕಾರವು ರೂ.53.00ಕೋಟಿಗಳ ಅನುದಾನವನ್ನು ನಿಗಧಿಪಡಿಸಿದೆ.<br>• ಸದರಿ ಯೋಜನೆಯಡಿ ಗ್ರಾಮೀಣ ಪ್ರದೇಶಗಳಿಗೆ ಬಹುಗ್ರಾಮ ಕುಡಿಯುವ ನೀರು ಸರಬರಾಜು ಯೋಜನೆಯ ಮುಖೇನ ಶುದ್ಧ ಕುಡಿಯುವ ನೀರನ್ನು ಒದಗಿಸಲು ಉದ್ದೇಶಿಸಲಾಗಿದೆ.<br>• ಜಲಧಾರೆ ಯೋಜನೆಯಡಿ ಮೊದಲನೆ ಹಂತವಾಗಿ ವಿಜಯಪುರ, ಧಾರವಾಡ, ರಾಯಚೂರು ಜಿಲ್ಲೆಗಳಲ್ಲಿ ಹಾಗೂ ಮಂಡ್ಯ ಜಿಲ್ಲೆಯ 3 ತಾಲ್ಲೂಕುಗಳಲ್ಲಿ (ಪಾಂಡವಪುರ, ನಾಗಮಂಗಲ ಮತ್ತು ಕೆ.ಆರ್.ಪೇಟೆ) ಅನುಷ್ಠಾನ ಮಾಡಲು ಪರಿಗಣಿಸಲಾಗಿದೆ. |

ಸಂ:ಗ್ರಾಕುನೀ&ನೈಇ 75 ಗ್ರಾನೀಸ(4)2021

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು